CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೩೮ | ಬೆಂಗಳೂರು, ಗುರುವಾರ, ಡಿಸೆಂಬರ್ ೨೫, ೨೦೦೩ (ಪುಷ್ಯ ೪, ಶಕ ವರ್ಷ ೧೯೨೫) | ಸಂಚಿಕೆ ೫೧ |
|---|---|---|



## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.**

**ಸಂಖ್ಯೆ: ಎ1:71ಎ:ಅಮೊ:31:2001-2002, ದಿನಾಂಕ: 20ನೇ ನವೆಂಬರ್ 2003**

**ಉಪಸ್ಥಿತರು:** ಕೆ. ಲೋಕನಾಥಶೆಟ್ಟಿ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಪಿರ್ಯಾದಿ:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲಾ

**ಪ್ರಸ್ತಾವನೆ:**

ದಿನಾಂಕ: 11.07.2001 ರಂದು ಒಂದು ಮಾರುತಿ ಸುಜುಕಿ ವ್ಯಾನ್ ನೊಂದಣಿ ಸಂಖ್ಯೆ: ಕೆಎ:04:ಎಂ:4887 ರಲ್ಲಿ ಒಟ್ಟು 92 ಕೆಜಿ ತೂಕದ ಶ್ರೀಗಂಧವನ್ನು ಯಾರೋ ಆಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ಶಿವಮೊಗ್ಗ ತಾಲ್ಲೂಕು ನಿಧಿಗೆ ಹೋಬಳಿ ಶಿವಮೊಗ್ಗದಿಂದ ಎನ್ಆರ್ ಪುರಕ್ಕೆ ಹೋಗುವ ಜಿಲ್ಲಾ ಮುಖ್ಯ ರಸ್ತೆಯ ಮುಂಡೇನಕೊಪ್ಪ ಕ್ರಾಸ್ ಬಳಿ ಸಾಗಿಸುತ್ತಿದ್ದಾಗ ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ವಶಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅಮೊ ಸಂಖ್ಯೆ: 31:01-02 ನ್ನು ದಾಖಲು ಮಾಡಿಕೊಂಡು ವಾಹನ ಮಾರುತಿ ಸುಜುಕಿ ವ್ಯಾನ್ ನೊಂದಣಿ ಸಂಖ್ಯೆ: ಕೆಎ:04:ಎಂ:4887 ಇಂಜಿನ್ ನಂ: ಐಎನ್.345105 ಛಾಸ್ಸಿ ಸಂಖ್ಯೆ: ಕಂಡುಬಂದಿರುವುದಿಲ್ಲವೆಂದು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ರವರು ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿರುತ್ತಾರೆ. ಅದರಂತೆ, ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ಉಪಾವಹಿ ಕನ್ನಡ ದಿನಪತ್ರಿಕೆಯಲ್ಲಿ ದಿನಾಂಕ: 29.07.2001 ರಂದು ಎಚ್ಚರಿಕೆ ಕನ್ನಡ ದಿನಪತ್ರಿಕೆಯಲ್ಲಿ ದಿನಾಂಕ: 30.07.01 ರಂದು ಹಾಗೂ ಸೆಪ್ಟೆಂಬರ್ 6 2001ರ ಭಾಗ-3 ಪುಟ ಸಂಖ್ಯೆ: 2228ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ಅಮಾನತ್ತುಪಡಿಸಿದ ವಾಹನ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ರವರಲ್ಲಿ ಪತ್ರವ್ಯವಹರಿಸಿದಾಗ ಸದರಿಯವರು ಕೆಎ:04-ಎಂ-4887ರ ವಾಹನದ ಬಿ ವರದಿಯನ್ನು ಕಳುಹಿಸಿಕೊಟ್ಟಿರುವುದನ್ನು ಪರಿಶೀಲಿಸಿದಾಗ, ಶ್ರೀ ಅಬ್ದುಲ್ ಸಾಬಿ ಬಿನ್ ಮೊಹಮದ್ ಹುಸೇನ್ ಮೂಡಿಗೆರೆ ಯವರ ಹೆಸರಿನಲ್ಲಿ ದಿನಾಂಕ: 16.10.96 ರಿಂದ ಇರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ. ಅದರಂತೆ ಈ ಪ್ರಾಧಿಕಾರದಿಂದ ದಿನಾಂಕ: 10.04.2002 ರಂದು ಕಾರಣ ಕೇಳುವ ನೋಟಿಸ್ ಜಾರಿಮಾಡಿದ್ದು, ಅದಕ್ಕೆ ಉತ್ತರವನ್ನು ದಿನಾಂಕ: 17.4.2002 ರಂದು ನೀಡಿದ್ದು, ಅದರಲ್ಲಿ ವಾಹನವನ್ನು ಎಫ್.ಆರ್. ನೂರ್ ಅಹಮದ್ ಬಿನ್ ಫಲ್ಸ್‌ರ್ ರೆಹಮಾನ್, ಸೆಲೆಕ್ಷನ್ ಸೆಂಟರ್, ಬಾಳೆಹೊನ್ನೂರು ರವರಿಗೆ ಮಾರಿರುತ್ತೇನೆಂದು ತಿಳಿಸಿದ ಮೇರೆಗೆ ಈ ಪ್ರಾಧಿಕಾರದಿಂದ ಶ್ರೀ ಎಫ್.ಆರ್. ನೂರ್ ಅಹಮದ್, ಬಾಳೆಹೊನ್ನೂರು ರವರಿಗೆ ದಿನಾಂಕ: 18.04.2002 ರಂದು ಕಾರಣ ಕೇಳುವ ಪತ್ರವನ್ನು ಜಾರಿಮಾಡಿದ್ದು, ಅದಕ್ಕೆ ಉತ್ತರವನ್ನು ನೂರ್ ಅಹಮದ್ ರವರು ಈ ಪ್ರಾಧಿಕಾರಕ್ಕೆ ದಿನಾಂಕ: 27.04.2002ರ ಪತ್ರದಲ್ಲಿ ತಿಳಿಸಿರುತ್ತಾರೆ. ಸದರಿ ಪತ್ರದಲ್ಲಿ ಸದರಿ ವಾಹನವನ್ನು ಇಮ್ತಿಯಾಜ್ ಅಹಮದ್ ಇಲಿಯಾಸ್ ನಗರ, ನ್ಯೂ ಮಂಡಲಿ ಅಲ್ ವರೂಕ್ ಸ್ಕೂಲ್ ಹತ್ತಿರ, ಶಿವಮೊಗ್ಗ ರವರಿಗೆ ಜೂನ್-2000 ರಲ್ಲಿ ಮಾರಿರುತ್ತೇನೆ ಎಂದು ತಿಳಿಸಿದನ್ವಯ, ಈ ಪ್ರಾಧಿಕಾರದಿಂದ ದಿನಾಂಕ: 2.5.2002 ಮತ್ತು 13.11.2002 ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ್ದು, ಪತ್ರ ಸ್ವೀಕರಿಸಿದ್ದು, ಅದರ ಸ್ವೀಕೃತಿ ಈ ಕಛೇರಿಗೆ ಬಂದಿರುತ್ತದೆ. ಅನಂತರ ಯಾವುದೇ ಉತ್ತರವನ್ನು ನೀಡದಿರುವುದರಿಂದ ಪುನಃ ದಿನಾಂಕ: 01.02.2003 ರಂದು ಕಾರಣ ಕೇಳುವ ಪತ್ರವನ್ನು ಜಾರಿಮಾಡಿದ್ದು, ಅದು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಅಲ್ಲದೇ ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲದ ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲಾ ರೀತಿಯ ಕ್ರಮಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ ವಾತಾವರಣದ ವೈಪರೀತ್ಯಾದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಮೌಲ್ಯವನ್ನು ಕಳೆದುಕೊಳ್ಳುವುದರಿಂದ ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾದ್ದರಿಂದ, ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಹಾಗೂ ಸ್ವತಃ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗುತ್ತದೆ. ಅಲ್ಲದೇ ದಿನಾಂಕ: 11.7.2001 ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಪಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಾಹನ ಸಮೇತ ವಶಪಡಿಸಿಕೊಂಡು, ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಸದರಿ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರು ಸಹ ಪ್ರಶ್ನಿಸಿಲ್ಲವಾದ್ದರಿಂದ, ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ, ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ದೃಷ್ಟಿಯಿಂದ ಹಾಗೂ ದಿನಾಂಕ: 11.07.2001 ರಂದು ಮಾರುತಿ ಸುಜುಕಿ ವ್ಯಾನ್ ಸಂಖ್ಯೆ: ಕೆಎ:04:ಎಂ:4887 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ ಸುಜುಕಿ ವ್ಯಾನ್ ನೊಂದಣಿ ಸಂಖ್ಯೆ: ಕೆಎ:04:ಎಂ:4887 ಇಂಜಿನ್ ನಂ: ಐಎನ್.345105 ಛಾಸ್ಸಿ ಸಂಖ್ಯೆ: ಕಂಡುಬಂದಿರುವುದಿಲ್ಲ ಹಾಗೂ 92 ಕೆಜಿ ತೂಕ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ: 20.11.2003 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ: 20.11.2003 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 1352

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-41/2003**

**APPLICANTS:** **V/s** **RESPONDENTS:**

1. Chapta Balappa @ Manik S/o C. Sayappa Age 55 years. Occ: Coolie, R/o Hadnoor, Zaheerabad Now at Sultanpur, Bidar and Others.

1. M/s G.E.O. Fast carriage Pvt. Ltd., Hyderabad,
2. National Insurance Co. Ltd., Gulbarga.

**PROCLAMATION**

Sri Chapta Balappa @ Manik S/o C. Sayappa F/o Davanand R/o Sultan Pur District, Bidar have/has filed application in this court claiming compensation stating that Late Davanand was working as cleaner under the Respondent No. 1 he met with an accident arising out of and during the course of employment as a result he died on 18.10.2003.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications or objections are received within the specified date the court will proceeded further in the matter.

Commissioner For Workmen's
Compensation, Bidar.

P.R. 1350

**IN THE COURT OF COMMISSIONER FOR WORKMEN'S COMPENSATION, BIDAR**
**No: LOB/WCA/Cr-42/2003**

**APPLICANTS:** **V/s** **RESPONDENTS:**

1. Gulkhan S/o Jumma Khan Age Major Occ Labour R/o Wadgoon Taluk Aurad District Bidar.

1. M/s

**PROCLAMATION**

Sri Gulkhan S/o Jamma Khan F/o Younus Khan R/o Wadgoan Taluk Aurad Dist. Bidar have/has filed application in this court claiming compensation stating that Late Younus Khan was working as Driver under the Respondent No. I he met with an accident arising out of and during the course of employment as a result he died on 5.12.2001.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications or objections are received within the specified date the court will proceeded further in the matter.

Commissioner For Workmen's
Compensation, Bidar.

P.R. 1351

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.**

**ಸಂಖ್ಯೆ: ಎ1:71ಎ:ಅಸಂದ:ಅಮೊ:32:2001-2002, ದಿನಾಂಕ: 20ನೇ ನವೆಂಬರ್ 2003**

**ಉಪಸ್ಥಿತರು:** ಕೆ. ಲೋಕನಾಥಶೆಟ್ಟಿ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲಾ

**ಪ್ರಸ್ತಾವನೆ:**

ದಿನಾಂಕ: 12.07.2001 ರಂದು ಒಂದು ಫಿಯೆಟ್‌ಕಾರು ನೊಂದಣೆ ಸಂಖ್ಯೆ: ಎಂ.ಇ.ಎಸ್. 2555 ರಲ್ಲಿ ಒಟ್ಟು 49 ಕೆಜಿ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಶಿವಮೊಗ್ಗ ನಗರದ ಆರ್.ಎಂ.ಸಿ. ಎದುರಿನ ಗೋಪಾಲಗೌಡ ಬಡಾವಣೆಯ ಶ್ರೀ ಶ್ರೀನಿವಾಸ ಗ್ಯಾರೇಜ್ ಹತ್ತಿರ ಅಕ್ರಮವಾಗಿ ಶ್ರೀಗಂಧವನ್ನು ಸಾಗಿಸುತ್ತಿದ್ದಾಗ ಶಿವಮೊಗ್ಗ ಅರಣ್ಯ ಸಂಚಾರಿ ದಳದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ, ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ 32:01-02ನ್ನು ದಾಖಲು ಮಾಡಿಕೊಂಡು ವಾಹನ ಫಿಯೆಟ್‌ಕಾರು ಸಂಖ್ಯೆ: ಎಂಇಎಸ್:2555ರ ಇಂಜಿನ್ ನಂ: 3ಎಂ:309, ಛಾಸ್ಸಿ ನಂ: ಪ್ರಿಮಿಯರ್.ಪಿಎ.229387 ಎಂದಿರುತ್ತದೆಂದು ತಿಳಿಸುತ್ತಾ, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು

ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿರುತ್ತಾರೆ. ಅದರಂತೆ, ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ: 29.07.2001ರ ಉಪಾಮಹಿ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ದಿನಾಂಕ: 30.7.2001ರ ಎಚ್ಚರಿಕೆ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ಸೆಪ್ಟೆಂಬರ್ 6 2001ರ ಭಾಗ-3ರ ಪುಟ ಸಂಖ್ಯೆ: 2228ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗದಲ್ಲಿ ಪತ್ರವ್ಯವಹರಿಸಿ ವಾಹನದ ಬಿ ವರದಿಯನ್ನು ಪಡೆದು ಪರಿಶೀಲಿಸಿದಾಗ, ಸದರಿ ವಾಹನವು ದಿನಾಂಕ: 6.4.2000 ರಿಂದ ಎ.ಜಿ. ಅಬ್ದುಲ್ ಸಮದ್ ಎಸ್‌ಎಸ್‌ಬಿ ನಗರ, 2ನೇ ಕ್ರಾಸ್, ಶಿವಮೊಗ್ಗ ರವರ ಹೆಸರಿನಲ್ಲಿರುತ್ತದೆಂದು ತಿಳಿಸಿರುತ್ತಾರೆ. ಅದರಂತೆ ದಿನಾಂಕ: 20.05.2002 ರಂದು ಮತ್ತು 27.08.2002 ರಂದು ಈ ಪ್ರಾಧಿಕಾರದಿಂದ ರಿಜಿಸ್ಟರ್ ಅಂಚೆ ಮುಖಾಂತರ ವಾಹನ ಮಾಲೀಕರಾದ ಎ.ಜಿ. ಅಬ್ದುಲ್ ಸಮದ್ ರವರಿಗೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ್ದು, ಅದು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಅಲ್ಲದೇ ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲದ ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲಾ ರೀತಿಯ ಕ್ರಮಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರೀತ್ಯಾದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾದ್ದರಿಂದ, ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಹಾಗೂ ಸ್ವತಃ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಬಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ: 12.7.2001 ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಪಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಶಪಡಿಸಿಕೊಂಡು, ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಸದರಿ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರು ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ, ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ದೃಷ್ಟಿಯಿಂದ ಹಾಗೂ ದಿನಾಂಕ: 12.7.2001 ರಂದು ಫಿಯೆಟ್‌ಕಾರು ಸಂಖ್ಯೆ: ಎಂಇಎಸ್:2555 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಪಿಯೆಟ್ ಕಾರು ನೊಂದಣಿ ಸಂಖ್ಯೆ: ಎಂಇಎಸ್:2555ರ ಇಂಜಿನ್ ನಂ: 3ಎಂ:309, ಛಾಸ್ಸಿ ನಂ: ಪ್ರಿಮಿಯರ್.ಪಿ.ಎ.229387 ಮತ್ತು 49 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ: 20.11.2003 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ: 20.11.2003 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 1353

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.**
**ಸಂಖ್ಯೆ: ಎ1:71ಎ:ಅಮೊ:53:2001-2002, ದಿನಾಂಕ: 20ನೇ ನವೆಂಬರ್ 2003**

**ಉಪಸ್ಥಿತರು:** ಕೆ. ಲೋಕನಾಥಶೆಟ್ಟಿ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲಾ

**ಪ್ರಸ್ತಾವನೆ:**

ದಿನಾಂಕ: 25.09.2001 ರಂದು ಒಂದು ಅಂಬಾಸೀಡರ್ ಕಾರು ನೋಂದಣಿ ಸಂಖ್ಯೆ: ಎಂಇಸಿ:378 ರಲ್ಲಿ ಒಟ್ಟು 102 ಕೆಜಿ ತೂಕದ ಶ್ರೀಗಂಧವನ್ನು ಯಾರೋ ಆಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ಶಿವಮೊಗ್ಗ ಅಯನೂರು ಮುಖ್ಯ ರಸ್ತೆಯ ಕೋಟ ಗಂಗೂರು ಗ್ರಾಮಕ್ಕೆ ತಿರುಗುವ ರಸ್ತೆಯ ಬಳಿ ತಿರುವಿನಲ್ಲಿ ಸಾಗಿಸುತ್ತಿದ್ದಾಗ ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ: 53:01-02ನ್ನು ದಾಖಲು ಮಾಡಿಕೊಂಡು ವಾಹನ ಅಂಬಾಸೇಡರ್ ಕಾರು ನೋಂದಣಿ ಸಂಖ್ಯೆ: ಎಂಇಸಿ:378ರ ಇಂಜಿನ್ ನಂ: ಡಿ1:97988 ಛಾಸ್ಸಿ ನಂ: 0-227231: 111-2214 ಎಂದಿರುತ್ತದೆಂದು ತಿಳಿಸುತ್ತಾ, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಇವರು ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿರುತ್ತಾರೆ. ಅದರಂತೆ ಸದರಿ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟ ಮೂಲ ದಾಖಲಾತಿಗಳೊಂದಿಗೆ ಹಕ್ಕುಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತುಪಡಿಸುವುದು ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಪ್ರಕಟಣೆಯನ್ನು ದಿನಾಂಕ: 10.10.2001ರ ಛಾಯ್ಸ್ ಆಫ್ ಶಿವಮೊಗ್ಗ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ಜನವರಿ 3 2002ರ ಭಾಗ-3 ಪುಟ ಸಂಖ್ಯೆ: 3026ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ರವರಲ್ಲಿ ಪತ್ರವ್ಯವಹರಿಸಿ, ವಾಹನದ ಬಿ ವರದಿಯನ್ನು ಪಡೆದು ಪರಿಶೀಲಿಸಿದಾಗ ವಾಹನದ ಇಂಜಿನ್ ನಂ: ಡಿ-197988 ಛಾಸ್ಸಿ ನಂ: 111-221492 ಆಗಿರುತ್ತದೆಂದು ಹಾಗೂ ಸದರಿ ವಾಹನವು ದಿನಾಂಕ: 10.5.2000 ರಿಂದ ಕೆ. ಕೃಷ್ಣ, ಬಿನ್ ಕೂರ್ಗಪ್ಪ, ಮ.ನಂ.48(ಎ) ಪ್ರಕಾಶ್ ಟ್ರೇಡರ್ಸ್, ಮುಖ್ಯರಸ್ತೆ, ಕೊಪ್ಪ ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ. ಅದರಂತೆ, ವಾಹನ ಮಾಲೀಕರಾದ ಶ್ರೀ ಕೆ. ಕೃಷ್ಣ, ಇವರಿಗೆ ಈ ಪ್ರಾಧಿಕಾರದಿಂದ ದಿನಾಂಕ: 01.02.2003 ಮತ್ತು 23.09.2003 ರಂದು ಎರಡು ಕಾರಣ ಕೇಳುವ ನೋಟೀಸ್‌ನ್ನು ರಿಜಿಸ್ಟರ್ ಅಂಚೆ ಮುಖಾಂತರ ಕಳುಹಿಸಿದ್ದು, ಅದು ಜಾರಿಯಾಗಿದ್ದು ಸ್ವೀಕೃತಿ ಈ ಕಛೇರಿಯಲ್ಲಿ ಬಂದಿರುತ್ತದೆ. ಆದರೆ ಈವರೆವಿಗೂ ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ಅಲ್ಲದೇ ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದು ಎಂಬುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಮೂಲ ವಾರಸುದಾರರು ಮೂಲ ದಾಖಲಾತಿಗಳನ್ನು ಹಾಜರ್‌ಪಡಿಸಿ ತಾವು ತಪ್ಪಿತಸ್ಥರಲ್ಲ ಎಂದು ಸಾಬೀತುಪಡಿಸಲು ವಿಫಲರಾದ ಕಾರಣ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ, ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ ಹಾಗೂ ಸದರಿ ವಾಹನದ ಮೂಲ ವಾರಸುದಾರರನ್ನು ಪತ್ತೆ ಹಚ್ಚಲು ಎಲ್ಲಾ ರೀತಿಯಿಂದ ಕ್ರಮ ಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ ವಾಹನವನ್ನು ಬಹಳಷ್ಟು ದಿವಸ ವಿಲೇವಾರಿ ಮಾಡದೇ ಬಿಟ್ಟಲ್ಲಿ ವಾತಾವರಣದ ವೈಪರೀತ್ಯಾದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಮೌಲ್ಯವನ್ನು ಕಳೆದುಕೊಳ್ಳುವುದರಿಂದ ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾದ್ದರಿಂದ, ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಪ್ರಯುಕ್ತ, ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರಬಹುದಾಗಿ ಭಾವಿಸಬಹುದಾಗಿರುತ್ತದೆ. ಅಲ್ಲದೇ ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶವನ್ನು ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ, ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ದೃಷ್ಟಿಯಿಂದ ಹಾಗೂ ದಿನಾಂಕ: 25.09.2001 ರಂದು ಅಂಬಾಸೀಡರ್ ಕಾರು ಎಂಇಸಿ-378 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆಯಲ್ಲಿ ತೊಡಗಿದ್ದವು ಎಂಬುದಾಗಿ ದಾಖಲೆಯಿಂದ ರುಜುವಾತಾಗಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ, ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸೀಡರ್ ಕಾರು ನೊಂದಣಿ ಸಂಖ್ಯೆ: ಎಂಇಸಿ:378 ಇಂಜಿನ್ ನಂ: ಡಿ1:97988, ಛಾಸ್ಸಿ ನಂ: ಒ:227231 : 111-2214 ಮತ್ತು 102 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ: 20.11.2003 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆಯನ್ನು ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ: 20.11.2003 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 1354

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ,**
**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.**

**ಸಂಖ್ಯೆ: ಎ1:71ಎ:ಅಮೊ:65:2001-2002, ದಿನಾಂಕ: 20ನೇ ನವೆಂಬರ್ 2003**

**ಉಪಸ್ಥಿತರು:** ಕೆ. ಲೋಕನಾಥಶೆಟ್ಟಿ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲಾ

**ಪ್ರಸ್ತಾವನೆ:**

ದಿನಾಂಕ: 18.10.2001 ರಂದು ಒಂದು ಫಿಯೆಟ್ ಕಾರು ನೋಂದಣಿ ಸಂಖ್ಯೆ: ಕೆಎ:20:ಎಂ:1881 ರಲ್ಲಿ ಒಟ್ಟು 47 ಕೆಜಿ ತೂಕದ ಶ್ರೀಗಂಧವನ್ನು ಯಾರೋ ಆಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ತೀರ್ಥಹಳ್ಳಿ ತಾ: ಹೊರಬೈಲು ಗ್ರಾಮವ್ಯಾಪ್ತಿಯ ಸಿ.ಕೆ. ರಸ್ತೆಯ ಒಳಗೆ ಹೋಗುವ ರಸ್ತೆ ತಿರುವಿನಲ್ಲಿ ಸಾಗಿಸುತ್ತಿದ್ದಾಗ, ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅಮೊ ಸಂಖ್ಯೆ:65:01-02ನ್ನು ದಾಖಲು ಮಾಡಿಕೊಂಡು ವಾಹನ ಫಿಯೆಟ್ ಕಾರು ನೋಂದಣಿ ಸಂಖ್ಯೆ: ಕೆಎ:20:ಎಂ:1881, ಇಂಜಿನ್ ನಂ:7342, ಛಾಸ್ಸಿ ಸಂಖ್ಯೆ: ಟಿ:103-ಜಿಐ.ಪಿಎ.059660 ಎಂದಿರುತ್ತದೆಂದು ತಿಳಿಸುತ್ತಾ, ಈ ಪ್ರಕರಣಕ್ಕೆ ಸಂಬಂಧಪಟ್ಟ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಪ್ರಕಾರ 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟ ಮೂಲ ದಾಖಲಾತಿಗಳೊಂದಿಗೆ ಹಕ್ಕುಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತುಪಡಿಸುವುದು ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ: 7.11.2001ರ ನುಡಿಗಿಡ ಮತ್ತು ಛಾಯ್ಸ್ ಆಫ್ ಶಿವಮೊಗ್ಗ ಎಂಬ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ಡಿಸೆಂಬರ್ 20, 2001ರ ಭಾಗ-3 ಪುಟ ಸಂಖ್ಯೆ: 2909ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ರವರಲ್ಲಿ ಪತ್ರವ್ಯವಹರಿಸಿ, ವಾಹನದ ಬಿ ವರದಿಯನ್ನು ಪಡೆದು ಪರಿಶೀಲಿಸಿದಾಗ, ಅದು ಮಾರುತಿ 1000 ಕಾರಾಗಿರುತ್ತದೆಂದು ತಿಳಿಸಿರುತ್ತಾರೆ. ಆದರೆ, ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡಿದ್ದು ಫಿಯೆಟ್ ಕಾರಾಗಿದ್ದು ಅಲ್ಲದೇ ಇಂಜಿನ್ ನಂ: ಹಾಗೂ ಛಾಸ್ಸಿ ನಂಬರ್‌ಗಳು ಕೂಡ ತಾಳೆಯಾಗಿರುವುದಿಲ್ಲ. ಇದರಿಂದ ಯಾರೋ ದುಷ್ಕರ್ಮಿಗಳು ಕದ್ದು ಖೋಟಾ ನಂಬರನ್ನು ನಮೂದಿಸಿ ಉದ್ದೇಶಪೂರ್ವಕವಾಗಿ ಅರಣ್ಯ ಉತ್ಪನ್ನವನ್ನು ಅಕ್ರಮವಾಗಿ ಸಾಗಿಸಲು ತೊಡಗಿಸಿದ್ದಾರೆ ಎಂಬುದು ರುಜುವಾತಾಗುತ್ತದೆ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನುಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಅಲ್ಲದೇ ಪ್ರಕಟಣೆಯಂತೆ 30 ದಿನಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲದ ಕಾರಣ, ಸಂಬಂಧಪಟ್ಟ ದಾಖಲಾತಿಗಳು ಹಾಗೂ ಮುದ್ದೆಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲಾ ರೀತಿಯ ಕ್ರಮಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ಬಹಳಷ್ಟು ದಿನ ವಾಹನ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರೀತ್ಯಾದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾದ್ದರಿಂದ, ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಈವರೆವಿಗೆ ಬಾರದೇ ಇದ್ದು, ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ ಅಲ್ಲದೆ ದಿನಾಂಕ: 18.10.2001 ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣೆಕೆಮಾಡುತ್ತಿದ್ದಾಗ ಫಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಶಪಡಿಸಿಕೊಂಡು, ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಸದರಿ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರು ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ, ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ದೃಷ್ಟಿಯಿಂದ ಹಾಗೂ ದಿನಾಂಕ: 18.10.2001 ರಂದು ಫಿಯೆಟ್ ಕಾರು ನೋಂದಣಿ ಸಂಖ್ಯೆ: ಕೆಎ:20:ಎಂ:1881 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಫಿಯೆಟ್ ಕಾರು ನೊಂದಣಿ ಸಂಖ್ಯೆ: ಕೆಎ:20:ಎಂ:1881, ಇಂಜಿನ್ ನಂ:7342, ಛಾಸ್ಸಿ ಸಂಖ್ಯೆ: ಟಿ:103-ಜಿಐ.ಪಿಎ.059660 ಮತ್ತು 47 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ.

ಈ ಆದೇಶವು ಈ ದಿನ ಅಂದರೆ ದಿನಾಂಕ: 20.11.2003 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆಯನ್ನು ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ: 20.11.2003 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 1355

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**KARNATAKA POWER TRANSMISSION CORPORATION LIMITED**
**Office of the Superintending Engineer, El.,**
**Transmission (Works), No.1551, C&D Block, Shivaram Marga, Kuvempu Nagar, Mysore-23.**
**No: SEE/T(W)MYS/EEE/AEE-2/2146-49, Dated: 21st November 2003**

**DRAFT NOTIFICATION**

Karnataka Power Transmission Corporation Limited has formulated a scheme under section 28 and clause (e) of section 18 of the Electricity Supply Act 1948 and the scheme is herewith published in pursuance of section 29(2) of the said Act. This notification is issued for information of the license holders and any other concerned persons, Particulars of the scheme are as hereunder:

| | |
|---|---|
| Name of the work: | Construction of 220 KV LILO line tapping from the existing 220 KV Shimoga-Mysore DC line near Bendenahalli limits to the proposed 220/66 KV RS at the newly approved location at Yachanahalli, C.R. Patna Tq., Hassan District. |
| Salient features: | For improving the voltage conditions and to meet future growth in and around C.R. Patna. |
| Areas passing through: | Bendenhalli, Sasalapura Koppalu, Yataganahalli. |
| Approximate cost: | Rs.140 lakhs. |

2. The proposed construction of 66 KV evacuation lines from the proposed 220/66 KV RS at yachanahalli, C.R. Patna Tq., are as follows:

(i) 66 KV DC line to link the existing 66 KV C.R. Patna-Kikkeri line including conversion of existing 66 KV SC line to DC towers upto existing 66/11 KV Kikkeri SS and extending the SC line on DC towers up to the existing 66/11 KV K.R.Pet SS, at an approximate cost of Rs.180 lakhs, additional length of line passing through Yachanahalli and Kikkeri limits.

(ii) 66 KV DC line to link the existing 66 KV Hirisave-Shravanabelagola line near Shravanabelagola 66/11 KV SS, at an approximate cost of Rs.185 lakhs, passing through Yachanahalli, Mallenahalli, Adagur, Doddatarahalli, Hirebelati, Kantharajapura, Baralu, B.Chorenahalli, Amanikere limits.

(iii) 66 KV DC line including conversion of existing 66 KV SC line to DC line upto the existing 66/11 KV C.R.Patna SS, at an approx. cost of Rs.50 lakhs the additional length of line passing through Yachanahalli and C.R. Patna limits.

(iv) 66 KV SC line on DC towers for linking the existing 66 KV H.N. Pura - C.R. Patna line near H.N. Pura, at an approx. cost of Rs.60 lakhs; passing through Sasalapura, Bendenhalli, C.R. Patna Limits.

KPTCL shall have and exercise all powers which the telegraph authorities possess under part-III of the Indian Telegraph Act 1985 (13 of 1985) for implementation of the above said scheme. Any Objections regarding the above scheme shall be sent to the Superintending Engineer, El., Transmission (Works), KPTCL, Mysore-23 within two months from the date of publication of this notification for KPTCL's pursuance.

Superintending Engineer, El.,
Transmission (Works), Mysore.

PD-127

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಇಂಜಿನಿಯರ್‌ರವರ ಕಾರ್ಯಾಲಯ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಬೆಳಗಾವಿ.**

**ಪ್ರಕಟಣೆ ಕ್ರಮ ಸಂಖ್ಯೆ: 606:ಬೃಕಾವಿ:ಕಾನಿಇಂ:ಬೆಳಗಾವಿ:ಕ-153:2989-91 ದಿನಾಂಕ: 15ನೇ ನವೆಂಬರ್ 2003**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು 1948ರ ಭಾರತೀಯ ವಿದ್ಯುಚ್ಛಕ್ತಿ ಸರಬರಾಜು ಅಧಿನಿಯಮದ ಪ್ರಕರಣ 28ರ ಅನ್ವಯ ಈ ಕೆಳಗೆ ತಿಳಿಸಿರುವ ಯೋಜನೆಗಳನ್ನು ರೂಪಿಸಿದೆ ಹಾಗೂ ಸದರೀ ಯೋಜನೆಗಳನ್ನು ಲೈಸೆನ್ಸ್‌ದಾರರು ಮತ್ತು ಆಸಕ್ತರಾದ ಯಾವುದೇ ಇತರೆ ವ್ಯಕ್ತಿಗಳ ತಿಳುವಳಿಕೆಗಾಗಿ ಸದರಿ ಅಧಿನಿಯಮದ ಪ್ರಕರಣ 29ರ (ಎ) ಅನ್ವಯ ಈ ಮೂಲಕ ಪ್ರಕಟಿಸಲಾಗಿದೆ.

| | | |
|---|---|---|
| ಯೋಜನೆಯ ಹೆಸರು | : | ಬೆಳಗಾಂ ಜಿಲ್ಲೆಯ ರಾಯಭಾಗ ತಾಲ್ಲೂಕಿನಲ್ಲಿ<br>1) ಚಿಕ್ಕೋಡಿಯಿಂದ ಕುಡಚಿಯವರೆಗೆ 220 ಕೆವಿ ಡಿ.ಸಿ. ಟ್ರಾನ್ಸ್‌ಮಿಶನ್ ಲೈನ್ ನಿರ್ಮಿಸುವುದು.<br>2) ಕುಡಚಿಯಿಂದ ಮಹಾಲಿಂಗಪುರವರೆಗೆ 220 ಕೆವಿ ಡಿ.ಸಿ. ಟ್ರಾನ್ಸ್‌ಮಿಶನ್ ಲೈನ್ ನಿರ್ಮಿಸುವುದು. |
| ಪ್ರಮುಖ ಲಕ್ಷಣಗಳು | : | ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜ್ ಸುಧಾರಿಸುವುದು ಸುತ್ತಲಿನ ಹಳ್ಳಿಗಾಡಿನ ಪ್ರದೇಶಗಳಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು. |
| ಹಾದುಹೋಗುವ ಪ್ರದೇಶ | : | **2) ಕುಡಚಿಯಿಂದ ಮಹಾಲಿಂಗಪುರ**<br>ಕುಡಚಿ, ಸರಹದ್ದು, ಸುತ್ತಟ್ಟಿ, ನಿಲಜಿ, ಅಲಕನೂರ, ಹಾರುಗೇರಿ, ತೇರದಾಳ, ಯರಗಟ್ಟಿ, ಹಂದಿಗುಂದ, ಚಿಮ್ಮಡ, ಮಹಾಲಿಂಗಪುರ.<br>**1) ಚಿಕ್ಕೋಡಿಯಿಂದ ಕುಡಚಿ**<br>ಚಿಕ್ಕೋಡಿ ಸರಹದ್ದು, ಬಸನಾಳಗದ್ದೆ ಕೆರೂರ, ಕಾಡಾಪೂರ, ನಂದಿಕುರಲಿ, ದಿಗ್ಗೆವಾಡಿ, ಜಲಪುರ, ಬಿರಡಿ, ಚಿಂಚಲಿ, ಕುಡಚಿ. |
| ಅಂದಾಜು ವೆಚ್ಚ | : | 1) 220 ಕೆವಿ ಡಿಸಿ. ಟ್ರಾನ್ಸ್‌ಮಿಶನ್ ಮಾರ್ಗ ಚಿಕ್ಕೋಡಿಯಿಂದ ಕುಡಚಿಗೆ ರೂ.758.60 ಲಕ್ಷ<br>2) 220 ಕೆವಿ ಡಿಸಿ ಟ್ರಾನ್ಸ್‌ಮಿಶನ್ ಮಹಾಲಿಂಗಪುರದಿಂದ ಕುಡಚಿಗೆ ರೂ.750.24 ಲಕ್ಷ |

ನಿಗಮವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯ್ದೆ 1885 (13)ನ ಭಾಗ-iii ಅನ್ವಯ ಟೆಲಿಗ್ರಾಫ್ ಪ್ರಾಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರಿಗಳನ್ನು ಹೊಂದಿರುತ್ತವೆ ಹಾಗೂ ಚಲಾಯಿಸುತ್ತದೆ. ಮೇಲಿನ ಯೋಜನೆಗಳಿಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಆಕ್ಷೇಪಣೆಗಳನ್ನು ನಿಗಮದ ಪರಿಗಣನೆಗಾಗಿ ಈ ಪ್ರಕಟಣೆ ಪ್ರಕಟವಾದ ದಿನಾಂಕದಿಂದ 31.12.2003 ರೊಳಗೆ ಕಾರ್ಯನಿರ್ವಾಹಕ ಇಂಜಿನೀಯರು (ವಿ) ಬೃಹತ್ ಕಾಮಗಾರಿ ವಿಭಾಗ ಕವಿಪ್ರನಿನಿ ಬೆಳಗಾವಿ ಇವರಿಗೆ ಕಳುಹಿಸುವುದು.

ಕಾರ್ಯನಿರ್ವಾಹಕ ಇಂಜಿನಿಯರು (ವಿ)
ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಬೆಳಗಾವಿ.

ಪಿ.ಡಿ. 128

